CPMG / KA / BG-GPO/13 / 2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೯, ೨೦೦೪ (ಭಾದ್ರಪದ ೧೮, ಶಕ ವರ್ಷ ೧೯೨೬) | ಸಂಚಿಕೆ ೩೭ |
|---|---|---|

## ಭಾಗ-೪-ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 28 ರಾಶಾಪ್ರ 2004, ಬೆಂಗಳೂರು, ದಿನಾಂಕ: 28ನೇ ಆಗಸ್ಟ್ 2004**

ಕರ್ನಾಟಕ ಪಶು ಸಂಪತ್ತು ಅಭಿವೃದ್ಧಿ ಅಧಿನಿಯಮ, 1961 (1966ರ 30)ರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5ಎ ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲು ಆದೇಶಿಸಲಾಗಿದೆ.

### ಕರ್ನಾಟಕ ಪಶು ಸಂಪತ್ತು ಅಭಿವೃದ್ಧಿ ಅಧಿನಿಯಮ, 1961

### ವಿಷಯಾನುಕ್ರಮಣಿಕೆ

**ಪ್ರಕರಣಗಳು:**

15. ಅಪರಾಧಗಳನ್ನು ವರದಿ ಮಾಡುವುದು ಅಧಿಕಾರಿಗಳ ಕರ್ತವ್ಯ
16. ಅಪರಾಧಗಳ ಸಂಜ್ಞಾನ
17. ಅಧಿಕಾರಿಗಳು ಸರ್ಕಾರಿ ನೌಕರರಾಗಿರುವುದು
18. ಕೆಲವು ವ್ಯವಹರಣೆಗಳ ಪ್ರತಿಷೇಧ
19. ಕೆಲವು ದಾವೆಗಳು ಮತ್ತು ಪ್ರಾಸಿಕ್ಯೂಷನ್‌ಗಳಿಗೆ ಪರಿಮಿತಿ
20. ನಿಯಮ ರಚನಾಧಿಕಾರ
21. ಧಾರ್ಮಿಕ ಉದ್ದೇಶಕ್ಕಾಗಿ ಸಮರ್ಪಿಸಿದ ಹೋರಿ
22. ನಿರಸನ ಮತ್ತು ಉಳಿಸುವಿಕೆಗಳು

ಅಧಿಸೂಚನೆ

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

1961ರ ಅಧಿನಿಯಮ 30:- ರಾಜ್ಯದಲ್ಲಿ ಪಶು ಸಂಪತ್ತನ್ನು ಅಭಿವೃದ್ಧಿಗೊಳಿಸಲು ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಉಪಬಂಧ ಕಲ್ಪಿಸುವ, ಕೆಳಗೆ ಸೂಚಿಸಿರುವ ಅಧಿನಿಯಮಿತಿಗಳು ಪ್ರಸ್ತುತ ರಾಜ್ಯದ ವಿವಿಧ ಪ್ರದೇಶಗಳಲ್ಲಿ ಜಾರಿಯಲ್ಲಿವೆ:-

1. ಮೈಸೂರು ಪಶುಸಂಪತ್ತು ಅಭಿವೃದ್ಧಿ ಅಧಿನಿಯಮ, 1951
2. ಕೊಡಗು ಪಶುಸಂಪತ್ತು ಅಭಿವೃದ್ಧಿ ಅಧಿನಿಯಮ, 1950
3. ಮುಂಬಯಿ ಪಶುಸಂಪತ್ತು ಅಭಿವೃದ್ಧಿ ಅಧಿನಿಯಮ, 1953
4. ಮದ್ರಾಸ್ ಪಶುಸಂಪತ್ತು ಅಭಿವೃದ್ಧಿ ಅಧಿನಿಯಮ, 1940

ಈ ಅಧಿನಿಯಮವನ್ನು ಏಕ ರೂಪದ ಅಧಿನಿಯಮವಾಗಿ ಇಡೀ ಹೊಸರಾಜ್ಯಕ್ಕೆ ಅನ್ವಯಿಸುವ ದೃಷ್ಟಿಯಿಂದ ವಿಧಾನಮಂಡಲದ ಮುಂದೆ ಮಂಡಿಸಲಾಗಿದೆ.

ಅಧಿನಿಯಮವು ನಿಯಮಿಸಲಾದ ವಯೋಮಿತಿಯನ್ನು ಹೊಂದಿರುವ ಹೋರಿಗಳನ್ನು ಇಟ್ಟುಕೊಳ್ಳಲು ಮತ್ತು ಕೀಳು ತಳಿಯ ಹೋರಿಗಳ ಬೀಜ ಒಡೆಯಲು ಲೈಸೆನ್ಸ್ ಪಡೆಯುವುದಕ್ಕಾಗಿ ಉಪಬಂಧ ಕಲ್ಪಿಸುತ್ತದೆ.

(1959ನೇ ಮಾರ್ಚ್ 19ನೇ ದಿನಾಂಕದ ಕರ್ನಾಟಕ ರಾಜಪತ್ರದ (ವಿಶೇಷ ಸಂಚಿಕೆ) ಭಾಗ IV 2-ಎ ಯಲ್ಲಿ ಪ್ರಕಟಿಸಲಾಗಿದೆ.)

## 1961ರ [1][ಕರ್ನಾಟಕ ಅಧಿನಿಯಮ][1] ಸಂಖ್ಯೆ 30

(1960ರ ಡಿಸೆಂಬರ್ ಏಳನೇ ದಿನಾಂಕದಂದು [1][ಕರ್ನಾಟಕ ರಾಜಪತ್ರ][1]ದಲ್ಲಿ ಪ್ರಕಟವಾಗಿದೆ.)

[1][ಕರ್ನಾಟಕ][1] ಪಶು ಸಂಪತ್ತು ಅಭಿವೃದ್ಧಿ ಅಧಿನಿಯಮ, 1961

(1961ರ ಡಿಸೆಂಬರ್ ಒಂದನೇ ದಿನಾಂಕದಂದು ರಾಜ್ಯಪಾಲರ ಅನುಮತಿ ಪಡೆಯಲಾಗಿದೆ.)

[1][ಕರ್ನಾಟಕ ರಾಜ್ಯ][1] ದಲ್ಲಿ ಪಶುಸಂಪತ್ತನ್ನು ಅಭಿವೃದ್ಧಿಗೊಳಿಸಲು ಉಪಬಂಧ ಕಲ್ಪಿಸುವ ಅಧಿನಿಯಮ.

[1][ಕರ್ನಾಟಕ ರಾಜ್ಯ][1] ದಲ್ಲಿ ಪಶು ಸಂಪತ್ತನ್ನು ಅಭಿವೃದ್ಧಿಗೊಳಿಸಲು ಉಪಬಂಧ ಕಲ್ಪಿಸುವುದು ಅವಶ್ಯಕವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಹನ್ನೆರಡನೇ ವರ್ಷದಲ್ಲಿ [1][ಕರ್ನಾಟಕ ರಾಜ್ಯ][1] ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:

1. **ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ:-** (1) ಈ ಅಧಿನಿಯಮವನ್ನು [1][ಕರ್ನಾಟಕ][1] ಪಶುಸಂಪತ್ತು ಅಭಿವೃದ್ಧಿ ಅಧಿನಿಯಮ, 1961 ಎಂದು ಕರೆಯತಕ್ಕದ್ದು.

(2) ಇದು ಇಡೀ [1][ಕರ್ನಾಟಕ ರಾಜ್ಯ][1] ಕ್ಕೆ ಅನ್ವಯವಾಗತಕ್ಕದ್ದು.

(3) ಇದು, 22ನೇ ಪ್ರಕರಣದಿಂದ ನಿರಸನಗೊಂಡ ಯಾವುದೇ ಅಧಿನಿಯಮಿತಿಯು ಜಾರಿಯಲ್ಲಿರುವ ಪ್ರದೇಶಗಳಲ್ಲಿ ಕೂಡಲೇ ಜಾರಿಗೆ ಬರತಕ್ಕದ್ದು ಮತ್ತು ಯಾವುದೇ ಇತರ ಪ್ರದೇಶದಲ್ಲಿ ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ [2][ದಿನಾಂಕ][2] ದಂದು ಜಾರಿಗೆ ಬರತಕ್ಕದ್ದು.

2. **ಪರಿಭಾಷೆಗಳು:-** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(ಎ) "ಹೋರಿ" ಎಂದರೆ ಕೋಣವೂ ಸೇರುತ್ತದೆ;

(ಬಿ) "ಹಸು" ಎಂಬುದರಲ್ಲಿ ಎಮ್ಮೆ ಮತ್ತು ಕಡಸು ಸೇರುತ್ತವೆ;

(ಸಿ) "ನಿರ್ದೇಶಕ" ಎಂದರೆ ರಾಜ್ಯ ಸರ್ಕಾರದಿಂದ [1][ಕರ್ನಾಟಕ ಪಶುಪಾಲನೆ ಮತ್ತು ಪಶುವೈದ್ಯಕೀಯ ಸೇವೆಗಳ ನಿರ್ದೇಶಕ][1] ನೆಂದು ನೇಮಕಗೊಂಡ ಅಧಿಕಾರಿ ಮತ್ತು 3ನೇ ಪ್ರಕರಣದ ಮೇರೆಗೆ ಈ ಅಧಿನಿಯಮದ ಮೇರೆಗಿನ ನಿರ್ದೇಶಕನ ಅಧಿಕಾರಗಳು ಮತ್ತು ಕರ್ತವ್ಯಗಳನ್ನು ನಿಹಿತಗೊಳಿಸಲಾಗಿರುವ ಅಥವಾ ಪ್ರದತ್ತಗೊಳಿಸಲಾಗಿರುವ ಇತರ ಯಾರೇ ವ್ಯಕ್ತಿಯನ್ನು ಒಳಗೊಳ್ಳತಕ್ಕದ್ದು;

(ಡಿ) "ಲೈಸೆನ್ಸು" ಎಂದರೆ 4ನೇ ಪ್ರಕರಣದ ಮೇರೆಗೆ ಮಂಜೂರು ಮಾಡಲಾದ ಲೈಸೆನ್ಸು;

(ಇ) "ಲೈಸೆನ್ಸು ನೀಡುವ ಅಧಿಕಾರಿ" ಎಂದರೆ ನಿರ್ದೇಶಕ ಅಥವಾ 4ನೇ ಪ್ರಕರಣದ ಮೇರೆಗೆ ಲೈಸೆನ್ಸು ಮಂಜೂರು ಮಾಡಲು ಅಧಿಕಾರ ಪಡೆದ ಯಾರೇ ಇತರ ಅಧಿಕಾರಿ;

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
2. ರಾಜ್ಯದ ಇತರ ಪ್ರದೇಶಗಳಲ್ಲಿ ಅಧಿನಿಯಮವು ಅಧಿಸೂಚನೆ ಮೂಲಕ 1-10-2000ರಂದು ಜಾರಿಗೆ ಬಂದಿದೆ. ಅಧಿಸೂಚನೆಯ ಪಾಠವು 375ನೇ ಪುಟದಲ್ಲಿದೆ.

(ಎಫ್) "ಅಧಿಸೂಚನೆ" ಎಂದರೆ ರಾಜಪತ್ರದಲ್ಲಿ ಪ್ರಕಟಿಸಲಾದ ಅಧಿಸೂಚನೆ;

(ಜಿ) "ನಿಯಮಿಸಲಾದುದು" ಎಂದರೆ ಈ ಅಧಿನಿಯಮದ ಮೇರೆಗೆ ರಚಿಸಲಾದ ನಿಯಮಗಳಿಂದ ನಿಯಮಿಸಲಾದುದು;

(ಎಚ್) "ಹೋರಿಯನ್ನು ಸಾಕಿಕೊಂಡವನು" ಎಂದರೆ ಹೋರಿಯನ್ನು ಸ್ವಂತವಾಗಿ ಹೊಂದಿರುವ ಅಥವಾ ಹೋರಿಯನ್ನು ತನ್ನ ವಶದಲ್ಲಿ ಅಥವಾ ಅಭಿರಕ್ಷೆಯಲ್ಲಿಟ್ಟುಕೊಂಡಿರುವ ವ್ಯಕ್ತಿ;

(ಐ) "ಬೀಜ ಒಡೆದ ಹೋರಿ" ಎಂದರೆ, ತನ್ನ ತಳಿಯನ್ನು ವೃದ್ಧಿಗೊಳಿಸಲು ಅಸಮರ್ಥಗೊಳಿಸಲಾದ ಹೋರಿ.

3. **ನಿರ್ದೇಶಕನ ಅಧಿಕಾರಗಳು ಅಥವಾ ಕರ್ತವ್ಯಗಳ ಪ್ರದಾನ:-** ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ಈ ಅಧಿನಿಯಮದ ಮೇರೆಗಿನ ನಿರ್ದೇಶಕನ ಎಲ್ಲ ಅಧಿಕಾರಗಳು ಮತ್ತು ಕರ್ತವ್ಯಗಳನ್ನು ಅಥವಾ ಆ ಪೈಕಿ ಯಾವುದೇ ಅಧಿಕಾರ ಅಥವಾ ಕರ್ತವ್ಯವನ್ನು ಯಾರೇ ವ್ಯಕ್ತಿಗೆ ಪ್ರದಾನ ಮಾಡಬಹುದು ಅಥವಾ ವಿಧಿಸಬಹುದು.

4. **ಒಂದು ನಿರ್ದಿಷ್ಟ ವಯೋಮಿತಿಯ ಹೋರಿಗಳ ಬಗ್ಗೆ ಲೈಸೆನ್ಸು ನೀಡುವುದು:-** (1) ಈ ಪ್ರಕರಣದ ಮೇರೆಗೆ ಮಂಜೂರು ಮಾಡಲಾದ ಲೈಸೆನ್ಸಿನ ಅಡಿಯಲ್ಲಿ ಮತ್ತು ಲೈಸೆನ್ಸಿನ ಷರತ್ತುಗಳಿಗನುಸಾರವಾಗಿ ಅಲ್ಲದೆ, ಯಾರೇ ವ್ಯಕ್ತಿಯು ನಿಯಮಿಸಲಾದ ವಯೋಮಿತಿಯ ಹೋರಿಯನ್ನು ಇಟ್ಟುಕೊಳ್ಳತಕ್ಕದ್ದಲ್ಲ.

**ವಿವರಣೆ:** ವ್ಯಕ್ತಿಯು ಒಂದಕ್ಕಿಂತ ಹೆಚ್ಚು ಹೋರಿಗಳನ್ನು ಸಾಕಿದ್ದಲ್ಲಿ ಅವನು ಪ್ರತಿಯೊಂದು ಹೋರಿಗೆ ಸಂಬಂಧಿಸಿದಂತೆ ಪ್ರತ್ಯೇಕ ಲೈಸೆನ್ಸು ಪಡೆದಿರತಕ್ಕದ್ದು.

(2) ಈ ಪ್ರಕರಣದ ಮೇರೆಗಿನ ಪ್ರತಿಯೊಂದು ಲೈಸೆನ್ಸನ್ನು ನಿರ್ದೇಶಕ ಅಥವಾ ಅವನು ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಅಧಿಕೃತಗೊಳಿಸಿದ ಪಶುವೈದ್ಯ ನಿರೀಕ್ಷಕನ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಯಾರೇ ಅಧಿಕಾರಿಯು ಮಂಜೂರು ಮಾಡತಕ್ಕದ್ದು. ಅದು ನಿಯಮಿಸಬಹುದಾದಂಥ ನಮೂನೆಯಲ್ಲಿ, ಅಂಥ ಅವಧಿಗೆ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟಿರತಕ್ಕದ್ದು:

ಪರಂತು, ಲೈಸೆನ್ಸಿನ ಮಂಜೂರಾತಿಗಾಗಿ ಯಾವ ಶುಲ್ಕವನ್ನೂ ವಿಧಿಸತಕ್ಕದ್ದಲ್ಲ.

5. **ಲೈಸೆನ್ಸುಗಳ ನಿರಾಕರಣೆ ಮತ್ತು ರದ್ದಿಯಾತಿ:-** (1) ನಿಯಮಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು, ಲೈಸೆನ್ಸು ನೀಡುವ ಅಧಿಕಾರಿಯು ಯಾವುದೇ ಹೋರಿಗೆ ಸಂಬಂಧಿಸಿದಂತೆ ಆ ಹೋರಿಯು ಅವನ ಅಭಿಪ್ರಾಯದಲ್ಲಿ,-

ಈ ಕೆಳಕಂಡಂತೆ ಇರುವುದೆಂದು ತೋರಿದರೆ ಲೈಸೆನ್ಸನ್ನು ಮಂಜೂರು ಮಾಡಲು ನಿರಾಕರಿಸಬಹುದು:-

(ಎ) ದೋಷಪೂರಿತವಾದುದು ಅಥವಾ ಕೆಳದರ್ಜೆಯ ಮತ್ತು ತತ್ಪರಿಣಾಮವಾಗಿ ದೋಷಪೂರಿತ ಮತ್ತು ಕೀಳು ಸಂತಾನವನ್ನು ಹುಟ್ಟಿಸುವ ಸಾಧ್ಯತೆ ಇದೆ; ಅಥವಾ

(ಬಿ) ವಾಸಿಯಾಗದ ಸಾಂಕ್ರಾಮಿಕ ಅಥವಾ ಸೋಂಕು ರೋಗದಿಂದ ಬಳಲುತ್ತಿದೆ ಅಥವಾ ಹೋರಿಯು ಸಂತಾನಾಭಿವೃದ್ಧಿ ಉದ್ದೇಶಕ್ಕೆ ಸೂಕ್ತವಲ್ಲವೆಂದೆನಿಸುವ ಯಾವುದೇ ಇತರ ರೋಗದಿಂದ ಬಳಲುತ್ತಿದೆ; ಅಥವಾ

(ಸಿ) ಅದನ್ನು ಸಾಕಿರುವ ಜಿಲ್ಲೆಯಲ್ಲಿ ಅಥವಾ ಜಿಲ್ಲೆಯ ಭಾಗದಲ್ಲಿ ಅದರ ಸಂತಾನವನ್ನು ಅಭಿವೃದ್ಧಿ ಪಡಿಸುವುದು ಸಾರ್ವಜನಿಕ ಹಿತದೃಷ್ಟಿಯಿಂದ ಅನಪೇಕ್ಷಿತವಾಗಿರುವಂಥ ತಳಿಗೆ ಸೇರಿದೆ.

(2) (ಎ) ಲೈಸೆನ್ಸಿನ ಷರತ್ತುಗಳ ಪೈಕಿ ಯಾವುದೇ ಷರತ್ತನ್ನು ಉಲ್ಲಂಘಿಸಿರುವುದಾದರೆ, ಲೈಸೆನ್ಸ್ ನೀಡುವ ಅಧಿಕಾರಿಯು, ತನ್ನ ಅಧಿಕಾರ ವ್ಯಾಪ್ತಿಯೊಳಗೆ ಇರುವ ಯಾವುದೇ ಹೋರಿಗೆ ಸಂಬಂಧಿಸಿದಂತೆ, ಲೈಸೆನ್ಸನ್ನು (ಅಂಥ ಲೈಸೆನ್ಸನ್ನು ತಾನೇ ಸ್ವತಃ ನೀಡಿದ್ದಿರಲಿ ಅಥವಾ ಯಾರೇ ಇತರ ಅಧಿಕಾರಿಯು ನೀಡಿರಲಿ) ಅದನ್ನು ರದ್ದುಗೊಳಿಸಬಹುದು.

(ಬಿ) ನಿರ್ದೇಶಕನು ಮತ್ತು ಲೈಸೆನ್ಸ್ ನೀಡುವ ಅಧಿಕಾರಿಗೆ ನಿಕಟ ವರಿಷ್ಠ ಪಶುಪಾಲನಾ ಇಲಾಖೆಯ ಅಧಿಕಾರಿಯು, ಮಂಜೂರು ಮಾಡಿದ ಲೈಸೆನ್ಸಿಗೆ ಸಂಬಂಧಿಸಿದಂತೆ, ಆ ಇಲಾಖೆಯ ಯಾರೇ ಇತರ ಅಧಿಕಾರಿಯು ನೀಡಿದ ಲೈಸೆನ್ಸಿಗೆ ಸಂಬಂಧಿಸಿದಂತೆ, ಲೈಸೆನ್ಸನ್ನು ನೀಡತಕ್ಕದ್ದಲ್ಲದ ಸಂದರ್ಭಗಳಲ್ಲಿ ಅದನ್ನು ಮಂಜೂರು ಮಾಡಿದ್ದರೆ, ರಾಜ್ಯ ಸರ್ಕಾರವು ಅದನ್ನು ರದ್ದುಗೊಳಿಸಬಹುದು.

(ಸಿ) (ಎ) ಖಂಡ ಅಥವಾ (ಬಿ) ಖಂಡದ ಮೇರೆಗೆ, ಲೈಸೆನ್ಸನ್ನು ರದ್ದುಗೊಳಿಸುವುದಕ್ಕೆ ಮುಂಚೆ, ಯಾವ ಕಾರಣಗಳ ಮೇಲೆ ಕ್ರಮಕೈಗೊಳ್ಳಲು ಉದ್ದೇಶಿಸಲಾಗಿದೆ ಎಂಬ ಬಗ್ಗೆ ಸಂಬಂಧಪಟ್ಟ ವ್ಯಕ್ತಿಗೆ ನೋಟೀಸು ನೀಡತಕ್ಕದ್ದು ಮತ್ತು ಅದರ ವಿರುದ್ಧ ಕಾರಣ ತೋರಿಸಲು ಅವನಿಗೆ ಸೂಕ್ತ ಅವಕಾಶ ನೀಡತಕ್ಕದ್ದು.

(3) ಈ ಪ್ರಕರಣದ ಮೇರೆಗೆ ಲೈಸೆನ್ಸನ್ನು ರದ್ದುಗೊಳಿಸಿದರೆ, ರಾಜ್ಯ ಸರ್ಕಾರವು ಅಥವಾ ಲೈಸೆನ್ಸನ್ನು ರದ್ದುಗೊಳಿಸುವ ಅಧಿಕಾರಿಯು, ಹೋರಿಯನ್ನು ಸಾಕಿಕೊಂಡಿರುವ ವ್ಯಕ್ತಿಗೆ ಅಥವಾ ಲೈಸೆನ್ಸನಲ್ಲಿ ಹೋರಿಯ ಮಾಲೀಕನೆಂದು ಹೆಸರಿಸಲಾದ ವ್ಯಕ್ತಿಗೆ, ರದ್ದಿಯಾತಿಯ ಕಾರಣಗಳೊಂದಿಗೆ ರದ್ದಿಯಾತಿಯ ಆದೇಶವನ್ನು ತಿಳಿಸತಕ್ಕದ್ದು.

(4) (1)ನೇ ಉಪ ಪ್ರಕರಣದ ಅಥವಾ (2) ನೇ ಉಪ ಪ್ರಕರಣದ ಮೇರೆಗಿನ ಲೈಸೆನ್ಸನ್ನು ಮಂಜೂರು ಮಾಡಲು ನಿರಾಕರಿಸುವ ಅಥವಾ ಲೈಸೆನ್ಸನ್ನು ರದ್ದುಗೊಳಿಸುವ ಆದೇಶದ ವಿರುದ್ಧ ಅಂಥ ಆದೇಶವನ್ನು ತಿಳಿಸಿದ ಮೂವತ್ತು ದಿನಗಳ ಒಳಗೆ,-

(i) ಆದೇಶವನ್ನು ನಿರ್ದೇಶಕರು ಹೊರಡಿಸಿದ್ದರೆ, ರಾಜ್ಯ ಸರ್ಕಾರಕ್ಕೆ;

(ii) ನಿರ್ದೇಶಕನ ಯಾರೇ ಅಧೀನ ಅಧಿಕಾರಿಯು ಆದೇಶವನ್ನು ಹೊರಡಿಸಿದ್ದರೆ, ನಿರ್ದೇಶಕರಿಗೆ

- ಅಪೀಲು ಸಲ್ಲಿಸಲು ಅವಕಾಶವಿರತಕ್ಕದ್ದು.

ಅಪೀಲಿನ ಮೇಲೆ ನೀಡಲಾದ ಆದೇಶವು ಅಂತಿಮವಾಗಿರತಕ್ಕದ್ದು.

6. **ಲೈಸೆನ್ಸನ್ನು ಹಿಂದಿರುಗಿಸುವುದು:-** ಹೋರಿಗೆ ಸಂಬಂಧಿಸಿದಂತೆ ಮಂಜೂರಾದ ಲೈಸೆನ್ಸನ್ನು,-

(ಎ) ಲೈಸೆನ್ಸಿನಲ್ಲಿ ನಿರ್ದಿಷ್ಟಪಡಿಸಲಾದ ಅವಧಿಯು ಮುಕ್ತಾಯವಾದರೆ; ಅಥವಾ

(ಬಿ) ಈ ಅಧಿನಿಯಮದ ಮೇರೆಗೆ ಲೈಸೆನ್ಸನ್ನು ರದ್ದುಗೊಳಿಸಿದರೆ; ಅಥವಾ

(ಸಿ) ಹೋರಿಯು ಮರಣ ಹೊಂದಿದರೆ ಅಥವಾ ನಿರ್ದೇಶಕರು ಅನುಮೋದಿಸಿದ ವಿಧಾನ ಮತ್ತು ರೀತಿಯಲ್ಲಿ ಪರಿಣಾಮಕಾರಿಯಾಗಿ ಬೀಜ ಒಡೆಯಲಾಗಿದೆ ಎಂದು ನಿಯಮಿಸಲಾದ ಅಧಿಕಾರಿಯು ಪ್ರಮಾಣೀಕರಿಸಿದರೆ

- ಲೈಸೆನ್ಸ್ ನೀಡಿದ ಅಧಿಕಾರಿಗೆ ಅದನ್ನು ಹಿಂದಿರುಗಿಸತಕ್ಕದ್ದು.

ಲೈಸೆನ್ಸನ್ನು ಅದರ ಅವಧಿಯು ಮುಕ್ತಾಯವಾದ ಅಥವಾ ಸಂದರ್ಭಾನುಸಾರ, ರದ್ದುಗೊಳಿಸಿದ ದಿನಾಂಕದಿಂದ ಅಥವಾ ಹೋರಿಯು ಮರಣ ಹೊಂದಿದ ದಿನಾಂಕದಿಂದ ಅಥವಾ ಹೋರಿಗೆ ಬೀಜ ಒಡೆಯಲಾಗಿದೆ ಎಂದು ಪ್ರಮಾಣ ಪತ್ರವನ್ನು ನೀಡಿದ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಹಿಂದಿರುಗಿಸತಕ್ಕದ್ದು.

7. **ಲೈಸೆನ್ಸಿನ ದ್ವಿಪ್ರತಿಯ ಮಂಜೂರಾತಿ:-** 4ನೇ ಪ್ರಕರಣದ ಮೇರೆಗೆ ಮಂಜೂರಾದ ಲೈಸೆನ್ಸು ಕಳೆದುಹೋಗಿದೆ ಅಥವಾ ನಾಶವಾಗಿದೆ ಎಂದು ಲೈಸೆನ್ಸು ನೀಡುವ ಅಧಿಕಾರಿಗೆ ಮನದಟ್ಟಾದರೆ, ಅಂಥ ಅಧಿಕಾರಿಯು, ನಿಯಮಿಸಬಹುದಾದ ಅಂಥ ಷರತ್ತುಗಳು ಮತ್ತು ಅಂಥ ಶುಲ್ಕದ ಸಂದಾಯಕ್ಕೆ ಒಳಪಟ್ಟು, ಅದರ ದ್ವಿಪ್ರತಿಯನ್ನು ಲೈಸೆನ್ಸುದಾರನಿಗೆ ನೀಡಬಹುದು ಮತ್ತು ಹಾಗೆ ಕಳೆದುಹೋದ ಅಥವಾ ನಾಶವಾದ ಲೈಸೆನ್ಸಿಗೆ ಸಂಬಂಧಿಸಿದಂತೆ ಈ ಅಧಿನಿಯಮದ ಎಲ್ಲ ಉಪಬಂಧಗಳು, ಅದು ಮೂಲ ಲೈಸೆನ್ಸಾಗಿದ್ದರೆ ಹೇಗೋ ಹಾಗೆ ಲೈಸೆನ್ಸಿನ ದ್ವಿಪ್ರತಿಗೂ ಅನ್ವಯಿಸತಕ್ಕದ್ದು.

8. **ಹೋರಿಗಳ ಪರಿಶೀಲನೆ:-** ಲೈಸೆನ್ಸು ನೀಡುವ ಅಧಿಕಾರಿಯು, ನಿಯಮಿಸಲಾದ ರೀತಿಯಲ್ಲಿ ನೋಟೀಸು ಜಾರಿ ಮಾಡುವ ಮೂಲಕ, ಹೋರಿಯನ್ನು ಸಾಕಿಕೊಂಡಿರುವ ಯಾರೇ ವ್ಯಕ್ತಿಯನ್ನು ಅದನ್ನು ಪರಿಶೀಲನೆಗಾಗಿ ಯಾವುದೇ ಸೂಕ್ತ ವೇಳೆಯಲ್ಲಿ ತಾನೇ ಸ್ವತ: ಅಥವಾ ಆ ಉದ್ದೇಶಕ್ಕಾಗಿ ಅವನಿಂದ ಪ್ರತಿನಿಯೋಜಿತನಾದ ಯಾರೇ ಅಧಿಕಾರಿಯ ಮೂಲಕ, ತತ್ಕಾಲದಲ್ಲಿ ಹೋರಿಯನ್ನು ಇಟ್ಟಿರುವ ಸ್ಥಳದಲ್ಲಿಯಾಗಲಿ ಅಥವಾ ಆದೇಶದಲ್ಲಿ ನಿರ್ದಿಷ್ಟಪಡಿಸಿದಂತೆ ಹೋರಿಯನ್ನು ಇಡಲಾದ ಗ್ರಾಮ, ಪಟ್ಟಣ ಅಥವಾ ನಗರದ ಯಾವುದೇ ನಿಯಮಿಸಿದ ಸ್ಥಳದಲ್ಲಿಯಾಗಲಿ ತರುವಂತೆ ಅಗತ್ಯಪಡಿಸಬಹುದು ಮತ್ತು ಆ ನಂತರ, ತದನುಸಾರವಾಗಿ ಪರಿಶೀಲನೆಗಾಗಿ ಅದನ್ನು ಒಪ್ಪಿಸಲು ಮತ್ತು ಸಂಬಂಧಪಟ್ಟ ಅಧಿಕಾರಿಗೆ ಅಂಥ ಪರಿಶೀಲನೆಗೆ ಸಂಬಂಧಪಟ್ಟಂತೆ ಎಲ್ಲ ಸೂಕ್ತ ನೆರವು ನೀಡುವುದು ಹೋರಿಯನ್ನು ಸಾಕಿಕೊಂಡಿರುವ ವ್ಯಕ್ತಿಯ ಕರ್ತವ್ಯವಾಗಿರತಕ್ಕದ್ದು.

9. **ಹೋರಿಗಳ ಬೀಜ ಒಡೆಯಲು ಆದೇಶ ನೀಡುವ ಅಧಿಕಾರ:-** (1) ಲೈಸೆನ್ಸ್ ನೀಡುವ ಅಧಿಕಾರಿಯು, ನಿಯಮಿಸಲಾದ ರೀತಿಯಲ್ಲಿ ನೋಟೀಸನ್ನು ಜಾರಿ ಮಾಡುವ ಮೂಲಕ, ನಿಯಮಿಸಲಾದ ವಯೋಮಿತಿಯನ್ನು ಹೊಂದಿದ ಹೋರಿಯನ್ನು ಸಾಕಿಕೊಂಡಿರುವ ಮತ್ತು ಈ ಸಂಬಂಧದಲ್ಲಿ ಈ ಅಧಿನಿಯಮದ ಮೇರೆಗೆ, ತತ್ಕಾಲದಲ್ಲಿ ಯಾವುದೇ ಲೈಸೆನ್ಸ್ ಹೊಂದಿಲ್ಲದ ಆ ಯಾರೇ ವ್ಯಕ್ತಿಯನ್ನು, ನೋಟೀಸು ಜಾರಿಗೊಳಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ, ನಿರ್ದೇಶಕರಿಂದ ಅನುಮೋದಿತವಾದ ಮತ್ತು ಆದೇಶದಲ್ಲಿ ನಿರ್ದಿಷ್ಟಪಡಿಸಲಾದ ವಿಧಾನದ ಮೂಲಕ ಮತ್ತು ಸಮರ್ಪಕವಾಗಿ ಹೋರಿಯ ಬೀಜ ಒಡೆಯುವಂತೆ ಅಗತ್ಯಪಡಿಸಬಹುದು.

(2) ಹೋರಿಯ ಮಾಲೀಕನು ಅಥವಾ ಅದನ್ನು ಸಾಕಿಕೊಂಡ ಇತರ ವ್ಯಕ್ತಿಯು, ಆ ನೋಟೀಸನ್ನು ಪಾಲಿಸಲು, ಬೀಜ ಒಡೆಯುವಿಕೆಯ ಬಗ್ಗೆ ತನ್ನದೇ ಆದ ವ್ಯವಸ್ಥೆಯನ್ನು ಮಾಡಿಕೊಳ್ಳಲು ಅಪೇಕ್ಷೆ ಪಟ್ಟಿದ್ದ ಹೊರತು, ಲೈಸನ್ಸು ನೀಡುವ ಅಧಿಕಾರಿಯು ಹಾಗೆ ಬೀಜ ಒಡೆಯುವಿಕೆಯನ್ನು ಉಚಿತವಾಗಿ ನೆರವೇರಿಸತಕ್ಕದ್ದು ಅಥವಾ ನೆರವೇರಿಸುವ ವ್ಯವಸ್ಥೆ ಮಾಡತಕ್ಕದ್ದು.

10. **ಲೈಸೆನ್ಸನ್ನು ಹಾಜರುಪಡಿಸುವುದು:-** ಯಾವ ಹೋರಿಯ ಸಂಬಂಧದಲ್ಲಿ ಲೈಸೆನ್ಸನ್ನು ಪಡೆಯಲಾಗಿತ್ತೋ ಹಾಗೂ ಅದು ಜಾರಿಯಲ್ಲಿರುವುದೋ, ತತ್ಕಾಲದಲ್ಲಿ ಅದನ್ನು ಸಾಕಿಕೊಂಡ ಯಾರೇ ವ್ಯಕ್ತಿಯು,-

(ಎ) ಸೂಕ್ತ ಕಾಲದೊಳಗೆ, ಹೋರಿಯನ್ನು ತತ್ಕಾಲಕ್ಕೆ ಇಟ್ಟಿರುವ ಯಾವುದೇ ಸ್ಥಳದಲ್ಲಿ ಲೈಸೆನ್ಸ್ ನೀಡುವ ಅಧಿಕಾರಿಯು ಅಥವಾ ಈ ಸಂಬಂಧದಲ್ಲಿ ನಿರ್ದೇಶಕರಿಂದ ಅಧಿಕಾರ ಪಡೆದ ಯಾರೇ ಇತರ ಅಧಿಕಾರಿಯು ಕೇಳಿದಾಗ ಕ್ಲುಪ್ತ ಕಾಲದೊಳಗೆ;

(ಬಿ) ಹಸುವಿಗೆ ಹೋರಿಯೊಂದಿಗೆ ಕೂಡಿಸುವ ಮೊದಲು ಹಸುವನ್ನು ಸ್ವಾಧೀನದಲ್ಲಿಟ್ಟುಕೊಂಡ ವ್ಯಕ್ತಿಯು ಕೇಳಿದಾಗ

- ಅಂಥ ಲೈಸೆನ್ಸನ್ನು ಹಾಜರುಪಡಿಸುವುದು ಅವನ ಕರ್ತವ್ಯವಾಗಿರತಕ್ಕದ್ದು.

11. **ದಂಡಗಳು:-** ಯಾರೇ ವ್ಯಕ್ತಿಯು,-

(ಎ) ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಲಾದ ಯಾವುದೇ ನಿಯಮ ಅಥವಾ ಆದೇಶದ ಉಪಬಂಧಗಳನ್ನು ಅಥವಾ ಲೈಸೆನ್ಸಿನ ಯಾವುವೇ ಷರತ್ತುಗಳನ್ನು ಉಲ್ಲಂಘಿಸಿ ಹೋರಿಯನ್ನು ಸಾಕಿಕೊಂಡರೆ; ಅಥವಾ

(ಬಿ) 8ನೇ ಪ್ರಕರಣದ ಮೇರೆಗೆ ಪರಿಶೀಲನೆಗಾಗಿ ಹೋರಿಯನ್ನು ಒಪ್ಪಿಸಬೇಕೆಂದು ಅಗತ್ಯಪಡಿಸಿದಾಗ, ಹಾಗೆ ಮಾಡಲು ತಪ್ಪಿದರೆ; ಅಥವಾ

(ಸಿ) 9ನೇ ಪ್ರಕರಣದ ಮೇರೆಗೆ ಜಾರಿ ಮಾಡಲಾದ ನೋಟೀಸನ್ನು ಪಾಲಿಸಲು ತಪ್ಪಿದರೆ; ಅಥವಾ

(ಡಿ) 10ನೇ ಪ್ರಕರಣದ ಮೇರೆಗೆ ಲೈಸೆನ್ಸನ್ನು ಹಾಜರುಪಡಿಸಬೇಕೆಂದು ಅಗತ್ಯಪಡಿಸಿದಾಗ ಹಾಗೆ ಮಾಡಲು ತಪ್ಪಿದರೆ

- ಇಪ್ಪತ್ತೈದು ರೂಪಾಯಿಗಳಿಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಮತ್ತು ತರುವಾಯದ ಯಾವುದೇ ಅಪರಾಧಕ್ಕೆ ಐವತ್ತು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯನಾಗತಕ್ಕದ್ದು.

12. **ಅಪರಾಧಗಳ ರಾಜಿ:-** (1) ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಲಾದ ಯಾವುದೇ ನಿಯಮದ ಮೇರೆಗೆ ಶಿಕ್ಷಾರ್ಹವಾದ ಯಾವುದೇ ಅಪರಾಧವನ್ನು, ಅಪರಾಧವು ಸಂಭವಿಸಿದ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿ ಇರುವ ಪಶುಪಾಲನೆಯ ಸಹಾಯಕ ನಿರ್ದೇಶಕರ ದರ್ಜೆಗಿಂತ ಕಡಿಮೆಯದಲ್ಲದ ದರ್ಜೆಯ ಪಶು ಸಂಗೋಪನಾ ಇಲಾಖೆಯ ಅಧಿಕಾರಿಯು ತಾನು ನಿಗದಿಪಡಿಸಿದ ಮೊಬಲಗು ಸಂದಾಯವಾದ ಮೇಲೆ ರಾಜಿಮಾಡಿಸಬಹುದು.

(2) (1) ನೇ ಉಪ ಪ್ರಕರಣದ ಮೇರೆಗಿನ ಅಪರಾಧದ ರಾಜಿಯ ತರುವಾಯ, ಸಂಬಂಧಪಟ್ಟ ವ್ಯಕ್ತಿಯು, ಅಭಿರಕ್ಷೆಯಲ್ಲಿದ್ದರೆ, ಅವನನ್ನು ಬಿಡುಗಡೆ ಮಾಡತಕ್ಕದ್ದು ಮತ್ತು ಅಪರಾಧದ ಸಂಬಂಧದಲ್ಲಿ ಅಂಥ ವ್ಯಕ್ತಿಯ ವಿರುದ್ಧ ಯಾವುದೇ ಕ್ರಿಮಿನಲ್ ನ್ಯಾಯಾಲಯದಲ್ಲಿ

ವ್ಯವಹರಣೆಗಳನ್ನು ಹೂಡಿದ್ದರೆ ರಾಜಿಯು ಖುಲಾಸೆಯಾಗಿರುವುದಾಗಿ ಭಾವಿಸತಕ್ಕದ್ದು ಮತ್ತು ಅಂಥ ಅಪರಾಧದ ಸಂಬಂಧದಲ್ಲಿ ಅಂಥ ವ್ಯಕ್ತಿಯ ವಿರುದ್ಧ ಯಾವುದೇ ಹೆಚ್ಚಿನ ವ್ಯವಹರಣೆಗಳನ್ನು ನಡೆಸತಕ್ಕದ್ದಲ್ಲ.

13. **ಹೋರಿಗಳ ಬೀಜ ಒಡೆಯಲು ಲೈಸೆನ್ಸ್ ನೀಡುವ ಅಧಿಕಾರಿಯ ಅಧಿಕಾರ:-** (1) 9ನೇ ಪ್ರಕರಣದ ಮೇರೆಗೆ ತಾನು ಸಾಕಿಕೊಂಡಿರುವ ಹೋರಿಯ ಬೀಜ ಒಡೆಯಬೇಕೆಂದು ಅಗತ್ಯಪಡಿಸಲಾದ ವ್ಯಕ್ತಿಯು ಹಾಗೆ ಮಾಡಲು ತಪ್ಪಿದರೆ, ಲೈಸೆನ್ಸು ನೀಡುವ ಅಧಿಕಾರಿಯು, ನಿರ್ದೇಶಕನು ಅನುಮೋದಿಸಿದ ವಿಧಾನದ ಮೂಲಕ ಮತ್ತು ಆ ರೀತಿಯಲ್ಲಿ ಉಚಿತವಾಗಿ ಹೋರಿಯ ಬೀಜ ಒಡೆಯತಕ್ಕದ್ದೆಂದು ಮತ್ತು ನಿಯಮಿಸಲಾದ ರೀತಿಯಲ್ಲಿ ಗುರುತು ಮಾಡಿಸತಕ್ಕದ್ದೆಂದು ನಿರ್ದೇಶಿಸಬಹುದು.

(2) (ಎ) ತತ್ಕಾಲದಲ್ಲಿ ಹೋರಿಯು ಯಾರ ಮಾಲೀಕತ್ವ, ಸ್ವಾಧೀನ ಅಥವಾ ಅಭಿರಕ್ಷೆಯಲ್ಲಿ ಇದೆ ಎಂದು ತಿಳಿಯದಿದ್ದರೆ ಮತ್ತು ನಿಯಮಿಸಲಾದ ರೀತಿಯಲ್ಲಿ ವಿಚಾರಣೆ ನಡೆಸಿದ ತರುವಾಯವೂ ಸಂಗತಿಯನ್ನು ಖಚಿತಪಡಿಸಿಕೊಳ್ಳಲಾಗದಿದ್ದರೆ, ಲೈಸೆನ್ಸು ನೀಡುವ ಅಧಿಕಾರಿಯು, ಹೋರಿಯನ್ನು ವಶಪಡಿಸಿಕೊಳ್ಳಬಹುದು ಅಥವಾ ವಶಪಡಿಸಿಕೊಳ್ಳುವಂತೆ ಮಾಡಬಹುದು ಮತ್ತು ಹೋರಿಯು ನಿಯಮಿಸಲಾದ ವಯೋಮಿತಿಯನ್ನು ಹೊಂದಿದೆ ಎಂದು ಮತ್ತು ಅದು 5 ನೇ ಪ್ರಕರಣದ (2) ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಯಾವುವೇ ಕಾರಣಗಳಿಂದ ತಳಿ ಸಂವರ್ಧನೆಯ ಉದ್ದೇಶಗಳಿಗೆ ಅನರ್ಹವೆಂದು ಅಭಿಪ್ರಾಯಪಟ್ಟರೆ, ನಿರ್ದೇಶಕನು ಅನುಮೋದಿಸಿದ ವಿಧಾನದ ಮೂಲಕ ಮತ್ತು ಆ ರೀತಿಯಲ್ಲಿ ಉಚಿತವಾಗಿ ಹೋರಿಯ ಬೀಜ ಒಡೆಯತಕ್ಕದ್ದೆಂದು ಮತ್ತು ನಿಯಮಿಸಲಾದ ರೀತಿಯಲ್ಲಿ ಗುರುತುಮಾಡತಕ್ಕದ್ದೆಂದು ನಿರ್ದೇಶಿಸಬಹುದು.

(ಬಿ) (ಎ)ಖಂಡದ ಮೇರೆಗೆ ವಶಪಡಿಸಿಕೊಳ್ಳಲಾದ ಪ್ರತಿಯೊಂದು ಹೋರಿಯನ್ನು, ಅಗತ್ಯವಿರುವೆಡೆಯಲ್ಲೆಲ್ಲ ಈ ಮೇಲೆ ಹೇಳಿದಂತೆ ಬೀಜ ಒಡೆದ ಮತ್ತು ಗುರುತು ಮಾಡಿದ ತರುವಾಯ ಬಹಿರಂಗ ಹರಾಜಿನ ಮೂಲಕ ಮಾರಾಟ ಮಾಡತಕ್ಕದ್ದು ಅಥವಾ ಈ ಸಂಬಂಧದಲ್ಲಿ ರಾಜ್ಯ ಸರ್ಕಾರದಿಂದ ಅಂಗೀಕೃತವಾದ ಧರ್ಮಾರ್ಥ ಗೋಶಾಲೆಗೆ ಅಥವಾ ರೋಗ ಚಿಕಿತ್ಸಾಲಯಕ್ಕೆ ಕಳುಹಿಸತಕ್ಕದ್ದು.

(ಸಿ) (ಎ) ಖಂಡದ ಮೇರೆಗೆ ವಶಪಡಿಸಿಕೊಳ್ಳಲಾದ ಯಾವುದೇ ಹೋರಿಯ ಮಾಲೀಕನು ಈ ಸಂಬಂಧದಲ್ಲಿ ನಿಗದಿಪಡಿಸಬಹುದಾದಂಥ ಕಾಲದೊಳಗೆ ಲೈಸೆನ್ಸ್ ನೀಡುವ ಅಧಿಕಾರಿಯ ಮುಂದೆ ಹಾಜರಾಗಿ ಅಂಥ ಅಧಿಕಾರಿಗೆ ಮನದಟ್ಟಾಗುವಂತೆ, ಆ ಹೋರಿಯನ್ನು ತಾನು ಹೊಂದಿರುವುದಾಗಿ ರುಜುವಾತುಪಡಿಸಿದ ಸಂದರ್ಭದಲ್ಲಿ,-

(i) ಹೋರಿಯನ್ನು ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿದ ಸಂದರ್ಭದಲ್ಲಿ, ಹೋರಿಯ ನಿರ್ವಹಣೆ ಮತ್ತು ಮಾರಾಟಕ್ಕೆ ತಗುಲಿದ ಮತ್ತು ನಿಯಮಿಸಿದ ರೀತಿಯಲ್ಲಿ ನಿರ್ಣಯಿಸಲಾದ ಬೆಲೆ, ಖರ್ಚು ಮತ್ತು ವೆಚ್ಚಗಳನ್ನು ಅಂಥ ಮಾರಾಟದಿಂದ ಬಂದ ಹಣದಿಂದ ಮುರಿದು ಉಳಿದದ್ದನ್ನು ಮಾಲೀಕನಿಗೆ ಸಂದಾಯ ಮಾಡತಕ್ಕದ್ದು; ಮತ್ತು

(ii) ಯಾವುದೇ ಇತರ ಸಂದರ್ಭದಲ್ಲಿ, ಹೋರಿಯ ನಿರ್ವಹಣೆಗೆ ತಗುಲಿದ ಮತ್ತು ನಿಯಮಿಸಲಾದ ರೀತಿಯಲ್ಲಿ ನಿರ್ಣಯಿಸಲಾದ ಬೆಲೆ, ಖರ್ಚು ಮತ್ತು ವೆಚ್ಚಗಳನ್ನು ಸಂದಾಯ ಮಾಡಿದ ತರುವಾಯ ಅದನ್ನು ಮಾಲೀಕನ ವಶಕ್ಕೆ ಒಪ್ಪಿಸತಕ್ಕದ್ದು.

14. **ಲೈಸೆನ್ಸ್ ನೀಡುವ ಅಧಿಕಾರಿ ಮೊದಲಾದವರಿಗೆ ಹೋರಿಯನ್ನು ಪರಿಶೀಲಿಸಲು ಅಥವಾ ಗುರುತು ಮಾಡಲು ಮತ್ತು ಆವರಣವನ್ನು ಪ್ರವೇಶಿಸಲು ಅಧಿಕಾರ:-** ಈ ಅಧಿನಿಯಮದ ಉದ್ದೇಶಗಳಿಗಾಗಿ, ಲೈಸೆನ್ಸು ನೀಡುವ ಅಧಿಕಾರಿ ಅಥವಾ ಈ ಸಂಬಂಧದಲ್ಲಿ ನಿರ್ದೇಶಕನಿಂದ ಅಧಿಕೃತನಾದ ಯಾರೇ ಅಧಿಕಾರಿಯು, ಎಲ್ಲ ಸೂಕ್ತ ಸಮಯಗಳಲ್ಲಿ, ಈ ಕೆಳಕಂಡ ವಿಷಯಗಳ ಬಗ್ಗೆ,-

(ಎ) ಯಾವುದೇ ಹೋರಿಯನ್ನು ಪರಿಶೀಲಿಸುವುದು;

(ಬಿ) ಯಾವುದೇ ಹೋರಿಗೆ ನಿಯಮಿಸಲಾದ ರೀತಿಯಲ್ಲಿ ನಿಯಮಿಸಲಾದ ಗುರುತನ್ನು ಮಾಡಲು; ಮತ್ತು

(ಸಿ) ನಿಯಮಿಸಬಹುದಾದಂಥ ಷರತ್ತುಗಳು ಮತ್ತು ನಿರ್ಬಂಧಗಳೇನಾದರು ಇದ್ದರೆ ಅವುಗಳಿಗೊಳಪಟ್ಟು, ಹೋರಿಯನ್ನು ಇಡಲಾಗಿದೆ ಎಂದು ತಾನು ನಂಬಲು ಕಾರಣವಿರುವ ಯಾವುದೇ ಆವರಣವನ್ನು ಅಥವಾ ಇತರ ಸ್ಥಳವನ್ನು ಪ್ರವೇಶಿಸುವುದು.

15. **ಅಪರಾಧಗಳನ್ನು ವರದಿ ಮಾಡುವುದು ಅಧಿಕಾರಿಗಳ ಕರ್ತವ್ಯ:-** ಎಲ್ಲ ಗ್ರಾಮಾಧಿಕಾರಿಗಳು ಮತ್ತು ನೌಕರರು ಹಾಗೂ ಪಶುಸಂಗೋಪನೆ, ಕೃಷಿ, ಸಮುದಾಯ ಅಭಿವೃದ್ಧಿ ಮತ್ತು ಕಂದಾಯ ಇಲಾಖೆಗಳ ಎಲ್ಲ ಅಧಿಕಾರಿಗಳು ಮತ್ತು ರಾಜ್ಯ ಸರ್ಕಾರವು ಅಧಿಸೂಚಿಸಬಹುದಾದಂಥ ಇತರ ಇಲಾಖೆಗಳ ಎಲ್ಲ ಅಧಿಕಾರಿಗಳಿಗೆ ಈ ಕೆಳಕಂಡವುಗಳನ್ನು ಮಾಡುವುದು ಅವರ ಕರ್ತವ್ಯವಾಗಿರತಕ್ಕದ್ದು,-

(ಎ) ತಮ್ಮ ಗಮನಕ್ಕೆ ಬರಬಹುದಾದ ಈ ಅಧಿನಿಯಮದ ಮೇರೆಗೆ ಶಿಕ್ಷಾರ್ಹವಾದ ಯಾವುದೇ ಅಪರಾಧವನ್ನು ಮಾಡಿದ ಬಗ್ಗೆ ಅಥವಾ ಯಾವುದೇ ಅಪರಾಧವನ್ನು ಮಾಡುವ ಪ್ರಯತ್ನದ ಅಥವಾ ಸಿದ್ಧತೆಯ ಬಗೆಗಿನ ಮಾಹಿತಿಯನ್ನು , ಕೂಡಲೇ ಹತ್ತಿರದ ಲೈಸೆನ್ಸು ನೀಡುವ ಅಧಿಕಾರಿಗೆ ಒದಗಿಸುವುದು;

(ಬಿ) ಅವರಿಗೆ ಗೊತ್ತಿರುವ ಅಥವಾ ಅಪರಾಧವನ್ನು ಮಾಡುವ ಅಥವಾ ಮಾಡುವ ಸಂಭವವಿದೆ ಎಂದು ನಂಬಲು ಕಾರಣವಿರುವ ಯಾವುದೇ ಅಂಥ ಅಪರಾಧ ಮಾಡುವುದನ್ನು ತಡೆಯಲು ಅವರ ಅಧಿಕಾರದಲ್ಲಿರುವ ಎಲ್ಲ ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳುವುದು; ಮತ್ತು

(ಸಿ) ಈ ಅಧಿನಿಯಮದ ಮೇರೆಗಿನ ಉಪಬಂಧಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಯಾರೇ ಲೈಸೆನ್ಸು ನೀಡುವ ಅಧಿಕಾರಿಗೆ ನೆರವು ನೀಡುವುದು.

16. **ಅಪರಾಧಗಳ ಸಂಜ್ಞಾನ:-** ಲೈಸೆನ್ಸು ನೀಡುವ ಅಧಿಕಾರಿ ಅಥವಾ ಈ ಸಂಬಂಧದಲ್ಲಿ ಅಂಥ ಅಧಿಕಾರಿಯಿಂದ ಅಧಿಕೃತನಾದ ಯಾರೇ ಅಧಿಕಾರಿಯಿಂದ ಮಾಡಲಾದ ದೂರಿನ ಮೇಲಲ್ಲದೆ, ಯಾರೇ ಮ್ಯಾಜಿಸ್ಟ್ರೇಟನು ಈ ಅಧಿನಿಯಮದ ಮೇರೆಗಿನ ಯಾವುದೇ ಅಪರಾಧದ ಸಂಜ್ಞಾನವನ್ನು ತೆಗೆದುಕೊಳ್ಳತಕ್ಕದ್ದಲ್ಲ.

**17. ಅಧಿಕಾರಿಗಳು ಸರ್ಕಾರಿ ನೌಕರರಾಗಿರುವುದು:-** ನಿರ್ದೇಶಕರು, ಪ್ರತಿಯೊಬ್ಬ ಲೈಸೆನ್ಸು ನೀಡುವ ಅಧಿಕಾರಿ, ಈ ಅಧಿನಿಯಮದ ಮೇರೆಗೆ ನಿರ್ದೇಶಕರಿಂದ ಅಥವಾ ಲೈಸೆನ್ಸು ನೀಡುವ ಅಧಿಕಾರಿಯಿಂದ ಅಧಿಕೃತರಾದ ಎಲ್ಲ ಅಧಿಕಾರಿಗಳು ಮತ್ತು ವ್ಯಕ್ತಿಗಳನ್ನು ಮತ್ತು ಎಲ್ಲ ಗ್ರಾಮಾಧಿಕಾರಿಗಳು ಮತ್ತು ನೌಕರರನ್ನು ಭಾರತೀಯ ದಂಡ ಸಂಹಿತೆ, 1860 (1860 ರ ಕೇಂದ್ರಾಧಿನಿಯಮ 45)ರ 21 ನೇ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ಸರ್ಕಾರಿ ನೌಕರರೆಂದು ಭಾವಿಸತಕ್ಕದ್ದು.

**18. ಕೆಲವು ವ್ಯವಹರಣೆಗಳ ಪ್ರತಿಷೇಧ:-** (1) ರಾಜ್ಯ ಸರ್ಕಾರದ ಪೂರ್ವ ಮಂಜೂರಾತಿ ಇಲ್ಲದೆ, ಈ ಅಧಿನಿಯಮದ ಮೇರೆಗೆ ಮಾಡಿದ ಅಥವಾ ಮಾಡಬೇಕೆಂದು ಉದ್ದೇಶಿಸಲಾದ ಯಾವುದೇ ಕೃತ್ಯಕ್ಕಾಗಿ ರಾಜ್ಯ ಸರ್ಕಾರದ ಯಾರೇ ಅಧಿಕಾರಿಯ ಅಥವಾ ನೌಕರನ ವಿರುದ್ಧ ಯಾವುದೇ ಪ್ರಾಸಿಕ್ಯೂಷನ್ ಅಥವಾ ಇತರ ವ್ಯವಹರಣೆ ನಡೆಸಲು ಅವಕಾಶವಿರತಕ್ಕದ್ದಲ್ಲ.

(2) ರಾಜ್ಯಸರ್ಕಾರದ ಯಾರೇ ಅಧಿಕಾರಿ ಅಥವಾ ನೌಕರನು ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ವಿಧಿಸಲಾದ ಕರ್ತವ್ಯಗಳು ಮತ್ತು ಪ್ರಕಾರ್ಯಗಳ ನಿರ್ವಹಣೆಯ ಕಾಲದಲ್ಲಿ, ಸದ್ಭಾವನೆಯಿಂದ ಆ ಕೃತ್ಯವನ್ನು ಮಾಡಿದ್ದರೆ, ಅವನು ಅಂಥ ಯಾವುದೇ ಕೃತ್ಯಕ್ಕೆ ಸಂಬಂಧಿಸಿದಂತೆ ಆ ಯಾವುದೇ ಸಿವಿಲ್ ಅಥವಾ ಕ್ರಿಮಿನಲ್ ವ್ಯವಹರಣೆಗೆ ಬದ್ಧನಾಗತಕ್ಕದ್ದಲ್ಲ.

**19. ಕೆಲವು ದಾವೆಗಳು ಮತ್ತು ಪ್ರಾಸಿಕ್ಯೂಷನ್‌ಗಳಿಗೆ ಪರಿಮಿತಿ:-** ಈ ಅಧಿನಿಯಮದ ಮೇರೆಗೆ ಮಾಡಲಾದ ಅಥವಾ ಮಾಡಬೇಕೆಂದು ಉದ್ದೇಶಿಸಲಾದ ಯಾವುದೇ ಕೃತ್ಯದ ಸಂಬಂಧದಲ್ಲಿ ಕೃತ್ಯದ ಬಗ್ಗೆ ಫಿರ್ಯಾದು ಮಾಡಿದ ದಿನಾಂಕದಿಂದ ಆರು ತಿಂಗಳೊಳಗಾಗಿ ದಾವೆ, ಪ್ರಾಸಿಕ್ಯೂಷನ್ ಅಥವಾ ಇತರ ವ್ಯವಹರಣೆಯನ್ನು ಹೂಡಿದ್ದ ಹೊರತು, ರಾಜ್ಯ ಸರ್ಕಾರದ ವಿರುದ್ಧ ಯಾವುದೇ ದಾವೆಯನ್ನು ಹೂಡತಕ್ಕದ್ದಲ್ಲ ಮತ್ತು ರಾಜ್ಯ ಸರ್ಕಾರದ ಯಾರೇ ಅಧಿಕಾರಿ ಅಥವಾ ನೌಕರನ ವಿರುದ್ಧ ಯಾವುದೇ ದಾವೆ, ಪ್ರಾಸಿಕ್ಯೂಷನ್ ಅಥವಾ ಇತರ ವ್ಯವಹರಣೆಯನ್ನು ಹೂಡತಕ್ಕದ್ದಲ್ಲ.

**20. ನಿಯಮ ರಚನಾಧಿಕಾರ:-** (1) ರಾಜ್ಯ ಸರ್ಕಾರವು, ಪೂರ್ವ ಪ್ರಕಟಣೆಯ ತರುವಾಯ, ಅಧಿಸೂಚನೆಯ ಮೂಲಕ, ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸಲು ನಿಯಮಗಳನ್ನು ರಚಿಸತಕ್ಕದ್ದು.

(2) ವಿಶೇಷವಾಗಿ ಮತ್ತು ಹಿಂದೆ ಹೇಳಿದ ಅಧಿಕಾರಗಳ ಸಾಮಾನ್ಯ ಅನ್ವಯಕ್ಕೆ ಬಾಧಕವಾಗದಂತೆ ಅಂಥ ನಿಯಮಗಳು, ಈ ಕೆಳಕಂಡವುಗಳ ಬಗ್ಗೆ ಉಪಬಂಧ ಕಲ್ಪಿಸಬಹುದು,-

(ಎ) ಈ ಅಧಿನಿಯಮದ ಮೂಲಕ ವ್ಯಕ್ತವಾಗಿ ಅಗತ್ಯಪಡಿಸಲಾದ ಅಥವಾ ನಿಯಮಿಸಬೇಕೆಂದು ಅನುಮತಿಸಲಾದ ಎಲ್ಲ ವಿಷಯಗಳು;

(ಬಿ) ಲೈಸೆನ್ಸುಗಳ ನಕಲು ಪ್ರತಿಗಳನ್ನು ನೀಡಲು ವಿಧಿಸಬಹುದಾದ ಶುಲ್ಕ ಮತ್ತು ಅವುಗಳನ್ನು ಯಾವ ಷರತ್ತುಗಳು, ನಿರ್ಬಂಧಗಳು ಮತ್ತು ಪರಿಮಿತಿಗಳಿಗೆ ಒಳಪಟ್ಟು ನೀಡಬಹುದು ಎಂಬುದು;

(ಸಿ) ಈ ಅಧಿನಿಯಮದ ಮೇರೆಗೆ ನೇಮಕಗೊಂಡ ಅಧಿಕಾರಿಗಳು ಚಲಾಯಿಸಬಹುದಾದ ಅಧಿಕಾರಗಳು ಮತ್ತು ನಿರ್ವಹಿಸಬೇಕಾದ ಕರ್ತವ್ಯಗಳು ಮತ್ತು ಅಂಥ ಅಧಿಕಾರಿಗಳು ಅನುಸರಿಸಬೇಕಾದ ಕಾರ್ಯ ವಿಧಾನ;

(ಡಿ) ಈ ಅಧಿನಿಯಮದ ಮೇರೆಗೆ ಹೊರಡಿಸಲಾದ ನೋಟೀಸುಗಳ ಮತ್ತು ಆದೇಶಗಳ ಜಾರಿ.

(3) (1) ನೇ ಉಪಪ್ರಕರಣದ ಅಥವಾ (2) ನೇ ಉಪಪ್ರಕರಣದ ಮೇರೆಗೆ ನಿಯಮವನ್ನು ರಚಿಸುವಲ್ಲಿ ರಾಜ್ಯ ಸರ್ಕಾರವು, ಆ ನಿಯಮವನ್ನು ಉಲ್ಲಂಘಿಸಿದ ತಪ್ಪಿತಸ್ಥನನ್ನು ಇಪ್ಪತ್ತೈದು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ದಂಡದೊಂದಿಗೆ ಶಿಕ್ಷಿಸುವ ಬಗ್ಗೆ ಉಪಬಂಧ ಕಲ್ಪಿಸಬಹುದು.

(4) ಈ ಪ್ರಕರಣದ ಮೇರೆಗೆ ರಚಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ, ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಒಂದು ಅಧಿವೇಶನ ಅಥವಾ ಎರಡು ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದಂಥ ಒಟ್ಟು ಮೂವತ್ತು ದಿನಗಳ ಅವಧಿಯ ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಲಾದ ಅಧಿವೇಶನ ಅಥವಾ ನಿಕಟೋತ್ತರ ಅಧಿವೇಶನದ ಮುಕ್ತಾಯಕ್ಕೆ ಮೊದಲು ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಎರಡು ಸದನಗಳೂ ಒಪ್ಪಿದಲ್ಲಿ ಅಥವಾ ನಿಯಮವನ್ನು ಮಾಡಬಾರದೆಂದು ಎರಡೂ ಸದನಗಳು ಒಪ್ಪಿದಲ್ಲಿ, ನಿಯಮವು, ತದನಂತರ ಅಂಥ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಸಂದರ್ಭಾನುಸಾರ ಪರಿಣಾಮಕಾರಿ ಯಾಗತಕ್ಕದ್ದಲ್ಲ; ಆದಾಗ್ಯೂ, ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು ಆ ನಿಯಮದ ಮೇರೆಗೆ ಹಿಂದೆ ಮಾಡಲಾದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧಕವಾಗತಕ್ಕದ್ದಲ್ಲ.

**21. ಧಾರ್ಮಿಕ ಉದ್ದೇಶಕ್ಕಾಗಿ ಸಮರ್ಪಿಸಿದ ಹೋರಿ:-** (1) (2)ನೇ ಉಪಪ್ರಕರಣದ ಉಪಬಂಧದಲ್ಲಿರುವುದನ್ನು ಉಳಿದು, ಈ ಅಧಿನಿಯಮದಲ್ಲಿ ಒಳಗೊಂಡಿರುವ ಯಾವುದೂ, ಯಾವುದೇ ಧಾರ್ಮಿಕ ಆಚರಣೆ ಅಥವಾ ಸಂಪ್ರದಾಯಗಳಿಗನುಸಾರವಾಗಿ ಧಾರ್ಮಿಕ ಉದ್ದೇಶಕ್ಕಾಗಿ ಸದ್ಭಾವನೆಯಿಂದ ಅರ್ಪಿಸಿದ ಹೋರಿಗೆ ಅನ್ವಯವಾಗತಕ್ಕದ್ದಲ್ಲ. ಪರಂತು, ಲೈಸೆನ್ಸು ನೀಡುವ ಅಧಿಕಾರಿಗೆ ನಿಯಮಿಸಲಾದ ರೀತಿಯಲ್ಲಿ ಹೋರಿಯನ್ನು ಅರ್ಪಿಸಿದ ಬಗ್ಗೆ ತಿಳಿಸಿರಬೇಕು.

(2) ಲೈಸೆನ್ಸು ನೀಡುವ ಅಧಿಕಾರಿಯು, (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ಅಂಥ ಯಾವುದೇ ಹೋರಿಯು, 5ನೇ ಪ್ರಕರಣದ (1)ನೇ ಉಪ ಪ್ರಕರಣದ (ಎ) ಅಥವಾ (ಬಿ) ಅಥವಾ (ಸಿ) ಉಪಖಂಡದಲ್ಲಿ ನಿರೂಪಿಸಲಾದ ವಿವರಣೆಯುಳ್ಳದ್ದಾಗಿದೆ ಎಂದು ಅಭಿಪ್ರಾಯಪಟ್ಟರೆ, ನಿರ್ದೇಶಕನು ಅನುಮೋದಿಸಿದ ವಿಧಾನದ ಮೂಲಕ ಮತ್ತು ರೀತಿಯಲ್ಲಿ ಸಮರ್ಪಕವಾಗಿ ಅವನು ಅಂಥ ಹೋರಿಗೆ ಬೀಜ ಒಡೆಸಬಹುದು.

**22. ನಿರಸನ ಮತ್ತು ಉಳಿಸುವಿಕೆಗಳು:-** ಮೈಸೂರು ಪ್ರದೇಶದಲ್ಲಿ ಜಾರಿಯಲ್ಲಿರುವಂಥ ಮೈಸೂರು ಪಶುಸಂಪತ್ತು ಅಭಿವೃದ್ಧಿ ಅಧಿನಿಯಮ, 1951 (1951ರ ಮೈಸೂರು ಅಧಿನಿಯಮ XIX), [1][ಬೆಳಗಾವಿ ಪ್ರದೇಶ][1] ದಲ್ಲಿ ಜಾರಿಯಲ್ಲಿರುವಂಥ ಮುಂಬಯಿ ಪಶು ಸಂಪತ್ತು ಅಭಿವೃದ್ಧಿ ಅಧಿನಿಯಮ, 1933 (1933 ರ ಮುಂಬಯಿ ಅಧಿನಿಯಮ-XXII), [1][ಮಂಗಳೂರು ಮತ್ತು ಕೊಳ್ಳೇಗಾಲ ಪ್ರದೇಶ][1] ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಜಾರಿಯಲ್ಲಿರುವ ಮದ್ರಾಸು ಪಶುಸಂಪತ್ತು ಅಭಿವೃದ್ಧಿ ಅಧಿನಿಯಮ, 1940 [1][1940ರ ಮದ್ರಾಸು ಅಧಿನಿಯಮ XV][1] ಮತ್ತು ಕೊಡಗು ಜಿಲ್ಲೆಯಲ್ಲಿ ಜಾರಿಯಲ್ಲಿರುವ ಕೊಡಗು ಪಶುಸಂಪತ್ತು ಅಭಿವೃದ್ಧಿ ಅಧಿನಿಯಮ, 1950 (1950ರ ಕೊಡಗು ಅಧಿನಿಯಮ III) - ಇವುಗಳನ್ನು ಈ ಮೂಲಕ ನಿರಸನಗೊಳಿಸಲಾಗಿದೆ:

ಪರಂತು, [1][ಕರ್ನಾಟಕ][1] ಸಾಮಾನ್ಯ ಖಂಡಗಳ ಅಧಿನಿಯಮ, 1899 (1899ರ [1][ಕರ್ನಾಟಕ][1] ಅಧಿನಿಯಮ III)ರ 6ನೇ ಪ್ರಕರಣದ ಮತ್ತು ಸದರಿ ಅಧಿನಿಯಮದ 8ನೇ ಮತ್ತು 24 ನೇ ಪ್ರಕರಣಗಳ ಉಪಬಂಧಗಳು, ಸದರಿ ಅಧಿನಿಯಮಿತಿಗಳು ಈ ಅಧಿನಿಯಮದ ಮೂಲಕ ನಿರಸನಗೊಂಡಿದ್ದರೆ ಮತ್ತು ಪುನರ್ ಅಧಿನಿಯಮಿತವಾಗಿದ್ದರೆ ಹೇಗೋ ಹಾಗೆ ಅನ್ವಯವಾಗತಕ್ಕದ್ದು.

**ಅಧಿಸೂಚನೆ**

**ಬೆಂಗಳೂರು, ದಿನಾಂಕ 19 ನೇ ಸೆಪ್ಟೆಂಬರ್, 2000 (ಎಚ್ ಎಫ್ 33 ಎ ಎಚ್ ಪಿ 99)**

ಕರ್ನಾಟಕ ಪಶುಸಂಪತ್ತು ಅಭಿವೃದ್ಧಿ ಅಧಿನಿಯಮ, 1961(1961ರ ಕರ್ನಾಟಕ ಅಧಿನಿಯಮ 30) ರ 1ನೇ ಪ್ರಕರಣದ (3) ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 2000 ದ ಅಕ್ಟೋಬರ್ 1 ನೇ ದಿನಾಂಕವನ್ನು ಸದರಿ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಪ್ರದೇಶಗಳನ್ನು ಹೊರತುಪಡಿಸಿ ಉಳಿದ ಪ್ರದೇಶಗಳಲ್ಲಿ ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ನಿರ್ದಿಷ್ಟಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಸಿ. ಜಯಲಕ್ಷ್ಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ.

The above translation of the Karnataka Live-Stock Improvement Act, 1961 shall be the authoritive text in Kannada Language under section 5A of the Karnataka Official Language Act, 1963 (Karnataka Act No.26 of 1963)

GOVERNOR OF KARNATAKA

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ. ದಕ್ಷಿಣಮೂರ್ತಿ**
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

ಪಿ.ಆರ್. 535

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಕಾಇ 22 ಕಾಬಾನಿ 2004, ಬೆಂಗಳೂರು, ದಿನಾಂಕ: 10ನೇ ಆಗಸ್ಟ್ 2004**

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಕಾರ್ಖಾನೆಗಳ ಕಾಯ್ದೆ, 1948ರ (ಕೇಂದ್ರ ಕಾಯ್ದೆ, 1948) ಕಲಂ 4 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಮೆ: ವಾಣಿ ಆರ್ಗಾನಿಕ್ಸ್ ಪ್ರೈವೇಟ್ ಲಿಮಿಟೆಡ್, ಪ್ಲಾಟ್ ನಂ. 4ಬಿ ಮತ್ತು ಡಿ, ಕೊಲ್ಹಾರ್ ಇಂಡಸ್ಟ್ರಿಯಲ್ ಏರಿಯಾ, ಬೀದರ್ (ಲೈಸೆನ್ಸ್ ಸಂಖ್ಯೆ: ಎಂವೈಬಿ/ಡಿಆರ್-167) ಕಾರ್ಖಾನೆಯೊಂದಿಗೆ ಮೆ: ಅಭ್ಯುದಯ ಕೆಮಿಕಲ್ಸ್ ಪ್ರೈವೇಟ್ ಲಿಮಿಟೆಡ್, ಪ್ಲಾಟ್ ಸಂ: 4ಎ, ಕೊಲ್ಹಾರ್ ಇಂಡಸ್ಟ್ರಿಯಲ್ ಏರಿಯಾ, ಬೀದರ್ (ಲೈಸೆನ್ಸ್ ಸಂ: ಎಂವೈ/ಬಿಡಿಆರ್ 154) ಕಾರ್ಖಾನೆಯನ್ನು ಈ ಕೆಳಗಿನ ಷರತ್ತುಗಳ ಮೇರೆಗೆ ಒಂದುಗೂಡಿಸಿ 2004 ರಿಂದ ಜಾರಿಗೆ ಬರುವಂತೆ ಅನುಮತಿ ನೀಡಿದೆ.

1. ಕಾರ್ಖಾನೆಯ ಆಡಳಿತವರ್ಗದವರು ಎರಡೂ ಕಾರ್ಖಾನೆಗಳ ನಿವೇಶನ ಹಾಗೂ ಎಲ್ಲಾ ಕಟ್ಟಡದ ವಿವರಗಳನ್ನು ತೋರಿಸಿ ತಯಾರಿಸಲಾದ ವಿವರವಾದ ನಕ್ಷೆಯನ್ನು ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶಕರಿಗೆ ಸಲ್ಲಿಸಿ ಅನುಮೋದನೆ ಪಡೆದುಕೊಳ್ಳುವುದು ಹಾಗೂ ವಿಲೀನದಂತೆ ಲೈಸೆನ್ಸ್‌ನಲ್ಲಿ ಅವಶ್ಯಕ ತಿದ್ದುಪಡಿಗಳನ್ನು ಹೊಂದಲು ಅವಶ್ಯಕ ಅರ್ಜಿ ಸಲ್ಲಿಸತಕ್ಕದ್ದು.
2. ಎರಡೂ ಕಾರ್ಖಾನೆಗಳ ಲೈಸೆನ್ಸ್ ವಿಲೀನದ ನಂತರ ಉಂಟಾಗುವ ಪರಮಾವಧಿ ಕೆಲಸಗಾರರ ಸಂಖ್ಯೆಗೆ ಅನುಗುಣವಾಗಿ ನಿಯಮದಲ್ಲಿ ಪ್ರದತ್ತವಾಗಿರುವ ಸುರಕ್ಷತೆ, ಆರೋಗ್ಯ ಹಾಗೂ ಕಲ್ಯಾಣ ಸೌಲಭ್ಯಗಳನ್ನು ಅನುಷ್ಠಾನಕ್ಕೆ ತರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿಮಲಾಕುಮಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು).

ಪಿ.ಆರ್. 525

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

**ಕಂದಾಯ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಕಂಇ 01 ಎಲ್‌ಆರ್‌ಎಂ 2004, ಬೆಂಗಳೂರು, ದಿನಾಂಕ: 18ನೇ ಆಗಸ್ಟ್ 2004**

ದಿ ಡಿಸ್ಕಾಲ್ಸಡ್ ಕಾರ್ಮೆಲೈಟ್ ಆಫ್ ಕರ್ನಾಟಕ-ಗೋವಾ ಪ್ರಾವಿನ್ಸ್, ಮಂಗಳೂರು ಇ ವರು ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲೂಕು, ಊರಗಡೂರು ಗ್ರಾಮದ ಸರ್ವೆ ನಂಬರು 15 ರಲ್ಲಿ 1.01 ಎಕರೆ, 47 ರಲ್ಲಿ 1.16 ಎಕರೆ, 48 ರಲ್ಲಿ 1.05 ಎಕರೆ ಮತ್ತು 49 ರಲ್ಲಿ 1.18 ಎಕರೆ ಒಟ್ಟು 5.00 ಎಕರೆ ಜಮೀನನ್ನು ಅನಾಥ ಮಕ್ಕಳ ಕಲ್ಯಾಣಕ್ಕೆ ಉಚಿತ ವಸತಿ ವಗೈರೆ ಸೌಲಭ್ಯ (ನಾನ್ ಫಾರ್ಮಲ್ ಎಜುಕೇಶನ್) ಒದಗಿಸುವ ಉದ್ದೇಶಕ್ಕಾಗಿ ಖರೀದಿಸಲು ಮಾಡಿದ ಬೇಡಿಕೆ ಹಾಗೂ ನಮೂನೆ 15-ಎ ಮತ್ತು 15-ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇ ವರು ತಮ್ಮ ಪತ್ರ ಸಂಖ್ಯೆ: ಎಲ್ ಆರ್ ಎಫ್/ಸಿಆರ್/136/2002-03, ದಿನಾಂಕ 1.7.2003 ರಲ್ಲಿ ಪ್ರಸ್ತಾಪಿತ ಗ್ರಾಮದಲ್ಲಿ ಒಟ್ಟು 5.00 ಎಕರೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109(1-ಎ) ಅಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಹಾಗೂ ದಾನವಾಗಿ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ, 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇ ನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು, ಸಾರ್ವಜನಿಕ ಹಿತಾಸಕ್ತಿಯ ಮೇರೆಗೆ, ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು, ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ, ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 63, 79-ಎ, 79-ಬಿ ಅಥವಾ 80 ರ ಅವಕಾಶಗಳಿಂದ ವಿನಾಯ್ತಿ ನೀಡಲು ಸದರಿ ಅಧಿನಿಯಮದ ಕಲಂ 109(1-ಎ) ರಲ್ಲಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆ ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ಅಧಿನಿಯಮ, 1995 ರ ಕಲಂ 109(1-ಎ) ಮತ್ತು ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ನಿಯಮಗಳು, 1996 ರ ನಿಯಮ 38-ಬಿ ಮತ್ತು 38-ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 63, 79-ಎ, 79-ಬಿ ಅಥವಾ 80 ಕ್ಕೆ ವಿನಾಯ್ತಿ ನೀಡಿ ದಿ ಡಿಸ್ಕಾಲ್ಸಡ್ ಕಾರ್ಮೆಲೈಟ್ ಆಫ್ ಕರ್ನಾಟಕ-ಗೋವಾ ಪ್ರಾವಿನ್ಸ್, ಮಂಗಳೂರು ಇ ವರು ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲೂಕು, ಊರಗಡೂರು ಗ್ರಾಮದ ಸರ್ವೆ ನಂಬರು 15 ರಲ್ಲಿ 1.01 ಎಕರೆ, 47 ರಲ್ಲಿ 1.16 ಎಕರೆ, 48 ರಲ್ಲಿ 1.05 ಎಕರೆ ಮತ್ತು 49 ರಲ್ಲಿ 1.18 ಎಕರೆ ಒಟ್ಟು 5.00 ಎಕರೆ ಜಮೀನನ್ನು ಅನಾಥ ಮಕ್ಕಳ ಕಲ್ಯಾಣಕ್ಕೆ ಉಚಿತ ವಸತಿ, ವಗೈರೆ ಸೌಲಭ್ಯ (ನಾನ್ ಫಾರ್ಮಲ್ ಎಜುಕೇಶನ್) ಒದಗಿಸುವ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109(1-ಎ) ಅಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:-

(1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

(2) ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956 ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ / ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇ ತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

(3) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964 ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.

(4) ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.

(5) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡೆಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

(6) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯ್ತಿ ನೀಡಲು ಶಿಫಾರಸ್ಸು ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇ ಲಾಖೆ (ಭೂಸುಧಾರಣೆ)

ಪಿ.ಆರ್. 529